

**ಕರ್ನಾಟಕ ವಿಧಾನ ಪರಿಷತ್ತು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 178(234)
ಸದಸ್ಯರ ಹೆಸರು : ಡಾ:ವೈ.ಎ.ನಾರಾಯಣಸ್ವಾಮಿ(ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 14/12/2021
ಉತ್ತರಿಸುವವರು : ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ವಲಯ ಉದ್ಯಮಗಳ ಸಚಿವರು.

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | ಕೋಲಾರ ನಗರದ ವ್ಯಾಪ್ತಿಯಲ್ಲಿರುವ ರಸ್ತೆಗಳು ತೀರಾ ಹದಗೆಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ರಸ್ತೆಗಳು ದುರಸ್ತಿ ಮಾಡಲು ತಗಲುವ ವೆಚ್ಚ ಎಷ್ಟು; | ಬಂದಿರುತ್ತದೆ.<br>ಕೋಲಾರ ನಗರದ ವ್ಯಾಪ್ತಿಯಲಿ ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆ ಕಾಮಗಾರಿಗಳ ಪೈಪ್‌ಲೈನ್ ಕಾಮಗಾರಿಗಳನ್ನು ನಿರ್ವಹಿಸುತ್ತಿರುವುದರಿಂದ ರಸ್ತೆಗಳು ಹಾಳಾಗಿರುತ್ತವೆ. ಸದರಿ ರಸ್ತೆಗಳ ದುರಸ್ಥಿಗೆ ರೂ.20.00 ಕೋಟಿಯೆಂದು ಅಂದಾಜಿಸಲಾಗಿದೆ (ವಿವರಗಳನ್ನು ಅನುಬಂದ-01 ರಲ್ಲಿ ಒದಗಿಸಲಾಗಿದೆ). |
| ಆ) | ರಸ್ತೆಗಳ ದುರಸ್ತಿಯ ವಿವರ, ತಗಲುವ ಅಂದಾಜು ಮೊತ್ತ ಎಷ್ಟು; | ಸುಮಾರು ರೂ.20.00 ಕೋಟಿಗಳ ಅವಶ್ಯಕತೆಯಿದ್ದು, ಕಾಮಗಾರಿಗಳ ಪಟ್ಟಿಯನ್ನು ಅನುಬಂಧ-1ರಲ್ಲಿ ಒದಗಿಸಲಾಗಿದೆ. |
| ಇ) | ಮೇಲ್ಕಂಡ ರಸ್ತೆಗಳನ್ನು ಸುಸ್ಥಿತಿಗೆ ತರಲು ಸರ್ಕಾರವು ರೂಪಿಸಿರುವ ಕಾರ್ಯ ಯೋಜನೆಗಳಾವವು; ಯಾವ ಕಾಲಮಿತಿಯೊಳಗೆ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲಾಗುವುದು? | 1. **2019-20ನೇ ಸಾಲಿನ 14ನೇ ಹಣಕಾಸು:**<br>2019-20ನೇ ಹಣಕಾಸು ಯೋಜನೆಯಡಿ ರೂ.788.00 ಲಕ್ಷಗಳ 22 ಕಾಮಗಾರಿಗಳ ಪೈಕಿ 05 ಸಂಖ್ಯೆ ಸಿವಿಲ್ ಕಾಮಗಾರಿಗಳನ್ನು ನಿರ್ವಹಿಸಿದ್ದು, ಡಾಂಬರ್ ರಸ್ತೆ: 1.30ಕಿ.ಮೀ, ಸಿ.ಸಿ ರಸ್ತೆ: 0.60 ಕಿ.ಮೀ ಉದ್ದದ ರಸ್ತೆ ನಿರ್ಮಾಣ ಮಾಡಲಾಗಿರುತ್ತದೆ.<br>**15ನೇ ಹಣಕಾಸು ಆಯೋಗದ ಅನುದಾನ:**<br>2020-21ನೇ ಸಾಲಿನ 15ನೇ ಹಣಕಾಸು ಯೋಜನೆಯಡಿ ರೂ. 716.92 ಲಕ್ಷಗಳಲ್ಲಿ 16 ಸಂಖ್ಯೆ ಕಾಮಗಾರಿಗಳ ಪೈಕಿ 2 ಸಂಖ್ಯೆ ಸಿವಿಲ್ ಕಾಮಗಾರಿಗಳಲ್ಲಿ ಡಾಂಬರು ರಸ್ತೆ: 0.21 ಕಿ.ಮಿ ನಿರ್ಮಾಣ ಹಂತದಲ್ಲಿದೆ.<br>**15ನೇ ಹಣಕಾಸು ಆಯೋಗದ ಅನುದಾನ:**<br>2021-22ನೇ ಸಾಲಿನ 15ನೇ ಹಣಕಾಸು ಯೋಜನೆಯಡಿ ರೂ. 542.00 ಲಕ್ಷಗಳಲ್ಲಿ 18 ಸಂಖ್ಯೆ ಕಾಮಗಾರಿಗಳ ಪೈಕಿ 1 ಸಂಖ್ಯೆ ಸಿವಿಲ್ ಕಾಮಗಾರಿಗಳಲ್ಲಿ ಡಾಂಬರು ರಸ್ತೆ: 0.90 ಕಿ.ಮೀ ಮತ್ತು ಸಿ.ಸಿ. ರಸ್ತೆ: 0.40 ಕಿ.ಲೋ ನಿರ್ಮಾಣ ಮಾಡಲು ಟೆಂಡರ್ ಪ್ರಕ್ರಿಯೆಯಲ್ಲಿದೆ.<br>2. ನಗರೋತ್ಥಾನ ಹಂತ-3ರ ಯೋಜನೆಯಡಿ ಕಾಮಗಾರಿಗಳನ್ನು ಕೈಗೊಳ್ಳಲಾಗಿದ್ದು, ವಿವರಗಳನ್ನು ಅನುಬಂಧ-2ರಲ್ಲಿ ಒದಗಿಸಲಾಗಿದೆ.<br>3. ನಗರೋತ್ಥಾನ ಹಂತ-3ರ ಯೋಜನೆಯಡಿ ರೂ.1300.00 ಲಕ್ಷಗಳ ಮೊತ್ತದಲ್ಲಿ ಪ್ರಮುಖ ರಸ್ತೆ: 10.80 ಕಿ.ಮೀ ಸಿ.ಸಿ ರಸ್ತೆ: 7.20 ಕಿ.ಮೀ ಉದ್ದದ ರಸ್ತೆ ನಿರ್ಮಾಣ ಮಾಡಲಾಗಿದ್ದು, ರೂ.1315.63 ಚರಂಡಿ: 7 ಕಿ.ಮೀ ಉದ್ದ ನಿರ್ಮಾಣ ಮಾಡಲಾಗಿದ್ದು, ರೂ. 1315.63 ಲಕ್ಷಗಳ ಮೊತ್ತದಲ್ಲಿ ಕೈಗೊಳ್ಳಲಾಗಿರುತ್ತದೆ. ಇದುವರೆಗೆ ಒಟ್ಟು ರೂ.794.55 ಲಕ್ಷಗಳ ವೆಚ್ಚವಾಗಿದ್ದು, ಕಾಮಗಾರಿಗಳು ಪ್ರಗತಿಯಲ್ಲಿದೆ. |

ಸಂಖ್ಯೆ: ನಅಇ 266 ಜಿಇಎಲ್ 2021(ಇ)

(ಎನ್. ನಾಗರಾಜು (ಎಂ.ಟಿ.ಬಿ))
ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ
ಸಾರ್ವಜನಿಕ ವಲಯ ಉದ್ಯಮಗಳ ಸಚಿವರು